ಒಂದಾಣೆ ಮಾಲೆ 302

# ಅರಸಿನ

(ಹಲ್ದಿ)



ಸಂಗ್ರಾಹಕ:
ಕವಿರಾಜ ಪಿ. ವಿ. ನಾಯಕ್.
ಆಯುರ್ವೇದ ಭಿಷಕ್, ಮಂಗಳೂರು.



1961

ಬೆಲೆ: ೧ ಆಣೆ.

ಒಂದಾಣೆ ಮಾಲೆ — ಮಂಗಳೂರು.

# ಅರಸಿನ (ಹಲ್ದಿ)

---

ಪುರಾತನ ವೈದ್ಯಗ್ರಂಥಗಳಲ್ಲಿ ಅರಸಿನದ ಔಷಧಿ ಗುಣಗಳ ಕುರಿತು ಚೆನ್ನಾಗಿ ಉಲ್ಲೇಖಿಸಿರುತ್ತಾರೆ ಅಡುಗೆಕೋಣೆಯಲ್ಲಿ, ಧಾರ್ಮಿಕ ಕಾರ್ಯಗಳಲ್ಲಿ, ಸ್ನಾನಕ್ಕಾಗಿ ಬಚ್ಚಲುಕೋಣೆಯಲ್ಲಿ, ಔಷಧಿಯಲ್ಲಿ ಮತ್ತು ರಂಗಿನ ಕೈಗಾರಿಕೆಯಲ್ಲಿಯೂ ಉಪಯೋಗಿಸುತ್ತಾರೆ. ಅಡುಗೆಯಲ್ಲಿ ಇದನ್ನು ಬಳಸುವದಂತೂ ಸರ್ವಸಾಮಾನ್ಯವೆಲ್ಲರಿಗೂ ತಿಳಿದಿರುವ ಸಂಗತಿಯಾಗಿದೆ.

ಇದಕ್ಕೆ ಬೇರೆ ಬೇರೆ ಭಾಷೆಗಳಲ್ಲಿ ಕರೆಯಲ್ಪಡುವ ಹೆಸರುಗಳು :—

ಸಂಸ್ಕೃತ—ಹರಿದ್ರಾ, ರಂಜನೀ, ನಿಶಾ ಇತ್ಯಾದಿ

ಹಿಂದಿ—ಹಲ್ದಿ ಮತ್ತು ದಖ್ಖನಿ, ಪಂಜಾಬಿ ಭಾಷೆಗಳಲ್ಲಿಯೂ ಹಲ್ದಿ ಎಂಬುದಾಗಿ ಕರೆಯಲ್ಪಡುತ್ತದೆ.

ಮರಾಠಿ ಮತ್ತು ಕೊಂಕಣಿಯಲ್ಲಿ—ಹಳದ್, ಹಲ್ದಿ.

ಗುಜರಾಥಿ—ಹಲದರ್, ಹಲದಾ.

ತೆಲುಗು—ಪಸುಪ್ಪು, ಎಸಪ್ಪು.

ತಮಿಳು—ಮಂಜಲ್.

ಮಲಯಾಳ—ಮಂಜ್ಞಲ್.

ತುಳು—ಮಂಜಳ್, ಮಣ್ಣ.

ಬಂಗಾಳಿ—ಹಲುದ್.

ಕಾಶ್ಮೀರಿ—ಲೀದರ್.

ಪಂಜಾಬ—ಹಲಜಾ.

ಮಲಯಾ—ಕುನ್ಹೇಟ್.

ಪಾರ್ಶಿ—ದರ್ ಸರ್ದ, ಜರ್ದ-ಚೋಬ.

ಅರಬಿಕ್—ಜರ್‌ಸುದ್, ಕುರ್‌ಕುಮ್, ಉರ್ಕ ಇಸ್-ಸಫ್.

ಉರ್ದು—ಹಲ್ದಿ.

ಬರ್ಮಾ—ಟನ್ನಿಮ್.

ಲೇಟಿನ್—ಕರ್ಕೂಮಾಲೊಂಗಾ (Curcumalonga).

ಚೀನಾ—ಹರದುಲ್ (Haradul), ಖಾಕ (Khaka)

ಇಂಗ್ಲಿಷ್—ಟರ್ಮೇರಿಕ್ (Turmeric).

ಫ್ರೆಂಚ್—ಕಕೂರ್ಮಾಲೊಂಗ್ (Curcumalong).

ಸಂಸ್ಕೃತದಲ್ಲಿ ಅರಸಿನಕ್ಕೆ ಅನೇಕ ಪರ್ಯಾಯ ನಾಮಪದಗಳು ಇವೆ. ಅವುಗಳು, ಅದರ ಹುಟ್ಟು, ಆಕಾರ, ವರ್ಣ, ಕ್ರಿಯಾ, ಸೌಂದರ್ಯ, ಸ್ತ್ರೀಲಿಂಗ ಮತ್ತು ಔಷಧಿ ಗುಣಾದಿಗಳನ್ನು ಅನುಸರಿಸಿ ಇಡಲ್ಪಟ್ಟಿವೆ ಎಂದರೆ ತಪ್ಪಾಗಲಾರದು. ಉದಾ:—ನೀಶಾಹ್ವಾ, ಪಿನಾ, ಯುವತಿ, ಹೇಮರಾಗೀಣಿ, ಕಾಂಚನಿ, ಕ್ಷಣದಾ, ಗೌರಿ, ಹೇಮಾಗ್ನಿ, ವರವರ್ಣಿನಿ, ಯಾಮಿನಿ, ಕೃಪಾ, ಗಂಧಪಲಾಶೀಕಾ. ಸುವರ್ಣವರ್ಣ, ಮಂಗಲಪ್ರದಾ, ಕಾವೇರಿ, ಉಮಾ, ವರ್ಣವತಿ, ಪೀತವಾಲುಕಾ; ಹೇಮರಾಗಿ, ರಂಭಗವಾಸಾ, ಘರ್ಷಣಿ, ಪೀತಿಕಾ, ರಂಜನಿ, ನಿಶಾ, ಬಹುಲಾ, ವರ್ಣಿನಿ, ರಾತ್ರಿನಾಮಿಕಾ, ಹರಿತ, ರಜ್ಜನಿ, ಸುವರ್ಣಾ, ಹರಿತಾ, ವಿಷಘ್ನಿ, ಪಿಂಗಾ, ಮಾಂಗಲ್ಯ, ಮಂಗಲಾ, ಲಕ್ಷ್ಮೀ, ಭದ್ರಾ, ಶಿಫಾ, ಶೋಭಾ, ಶೋಭಾನಾ, ಶುಭಗಾಹ್ವಾ, ಶ್ಯಾಮಾ, ಜ್ವರಾಂತಿಕಾ, ಯೋಷಿತ್‌ಪ್ರಿಯಾ, ಕೃಮಿಘ್ನಿ, ಹೃದ್ವಿಲಾಸಿನೀ, ಜಯಂತೀ. ದೀರ್ಘರಾಗ. ವರ್ಣವಿಲಾಸಿನಿ ಮತ್ತು ಹಲದಿ ಇತ್ಯಾದಿ.

ಅರಸಿನವನ್ನು ದಕ್ಷಿಣ ಹಿಂದೂಸ್ಥಾನದಲ್ಲಿ ಮನೆಯ ತೋಟಗಳಲ್ಲಿಯೂ, ಮುಂಬಾಯಿ, ಬಂಗಾಲ, ಅಲ್ಲದೆ ಹಿಂದೂಸ್ತಾನದ ಇತರ ಭಾಗಗಳಲ್ಲಿಯೂ ವಿಶೇಷವಾಗಿ ಬೆಳಸುತ್ತಾರೆ. ಪೂರ್ವ ಮತ್ತು ಪಶ್ಚಿಮಘಟ್ಟಗಳ ಜವುಗು ಪ್ರದೇಶಗಳಲ್ಲಿಯೂ ಇದು ಬೆಳೆಯುತ್ತದೆ. ಭಾರತದ ಕಾಡು ಉತ್ಪತ್ತಿಗಳಲ್ಲಿ ಇದು ಒಂದಾಗಿದೆ.

ಶುಂಠಿಗಿಡದ ಕುಟುಂಬಕ್ಕೆ ಸೇರಿದ ಅರಸಿನ ಗಿಡವು ಸುಮಾರು ಮೂರು ಅಡಿಗಳಷ್ಟು ಎತ್ತರಕ್ಕೆ ಬೆಳೆಯುತ್ತದೆ. ಇದರ ಮೂಲ ಕಂದಗಳಲ್ಲಿರುವ ಬೇರುಗಳು ಸ್ವಲ್ಪ ಅರಸಿನ ವರ್ಣವಾಗಿ ಮೃದುವಾಗಿಯೂ, ಉದ್ದವಾಗಿಯೂ ಸಾಧಾರಣ ಬೆರಳುಗಳಷ್ಟು ಗಾತ್ರವಾಗಿಯೂ ಹಲವು ಶಾಖೋಪಶಾಖೆಗಳಿಂದ ಸೇರಿದ ಕಂದಮೂಲವಹಗಳಾಗುವವು. ಸಾಮಾನ್ಯವಾಗಿ ಒಂದು ಗಿಡಕ್ಕೆ ಸರ್ವಸಾಧಾರಣ ಸುಮಾರು ಹತ್ತು ಶಾಖೆಗಳಿಂದ ನಾಲ್ವತ್ತರಷ್ಟು ಶಾಖೆಗಳು ಕೂಡಿ ಬೆಳೆಯುವುದಿದೆ. ಬೆಳೆದ ಬೇರುಗಳ

ಕಾಂಡದ ಹಸಿ ಚಿಕ್ಕ ಚಿಕ್ಕ ತುಂಡುಗಳನ್ನೇ ನೆಡುವರು. ಆ ತುಂಡುಗಳಿಗೆ ಮೊಳಕೆ ಬಂದು ಅವು ಸಂಪೂರ್ಣ ಬೆಳೆಯಲು ಒಂಭತ್ತು ತಿಂಗಳಿಂದ ಹತ್ತು ತಿಂಗಳ ಪರಿಯಂತದ ಅವಧಿ ಬೇಕಾಗುವದು. ಒಂದು ಎಕ್ರೆಯಲ್ಲಿ ಸುಮಾರು ಐದುಸಾದಿರವಿಂದ ಹತ್ತುಸಾವಿರ ರಾತ್ಲುಗಳಷ್ಟು ಅರಸಿನವು ದೊರೆಯುತ್ತದೆಂದು ಅಂದಾಜುಮಾಡಲಾಗಿದೆ. ಇನ್ನೂ ಜಾಸ್ತಿ ಬೆಳೆಸಲು ಸಂಶೋಧನೆಯ ಪ್ರಯತ್ನವನ್ನು ಕೃಷಿ ಇಲಾಖೆಯವರು ಮಾಡುತ್ತಾರೆ.

ಮಹಾರಾಷ್ಟ್ರದಲ್ಲಿ ಖಾರ ಉಳ್ಳ ಮನೋರಂಜಕವಾದ ಅರಸಿನ ವರ್ಣವುಳ್ಳ ಅಂಡಾಕೃತಿಯ ಲೋಖಂಡಿ (ರಾಜಪುರಿ) ಎಂಬ ಜಾತಿಯ ಅರಸಿನವನ್ನು ರಂಗಿನ ಕೈಗಾರಿಕೆಯಲ್ಲಿ ಹೆಚ್ಚಾಗಿ ಉಪಯೋಗಿಸುತ್ತಾರೆ. ಮದ್ರಾಸುಪ್ರಾಂತದಲ್ಲಿ ಚಿನ್ನವಾದಾನ್ ಮತ್ತು ಪೇರುಮದಾನ್ ಎಂಬ ಎರಡು ವಿಧದವುಗಳನ್ನು ಬೆಳಸುತ್ತಾರೆ. ಬಯಲುಪ್ರದೇಶದಲ್ಲಿ ಬೆಳೆಯುವ ಅರಸಿನಕ್ಕಿಂತಲೂ ಗುಡ್ಡಪ್ರದೇಶದಲ್ಲಿ ಬೆಳೆಯುವ ಅರಸಿನವು ಶ್ರೇಷ್ಠತರದ್ದಾಗಿದೆ.

ಬೆಳೆದ ಅರಸಿನದ ಬೇರುಗಳನ್ನು ಸಗಣಿ ನೀರಿನಲ್ಲಿ ಹಾಕಿ ಕಬ್ಬಿಣದ ಪಾತ್ರೆಯಲ್ಲಿ ಅವು ಮೃದುವಾಗುವಂತೆ ಬೇಯಿಸಿ ನಂತರ ಚೆನ್ನಾಗಿ ಒಣಗಿಸಿ ಬಿತ್ತದ ಬುಟ್ಟಿಯಲ್ಲಿ ಚಿಕ್ಕ ಕಲ್ಲಿನ ಹರಳುಗಳೊಡನೆ ಹಾಕಿ ಅವುಗಳಿಂದ ಹದವನ್ನರಿತು ತಿಕ್ಕಿ ಹೊಳಪುಬರುವಂತೆ ಮಾಡಿ ಹರಳುಬೀಜದ ಜಿಗಟು, ಪಟಕಾರದ ಹುಡಿ ಮತ್ತು ಅರಸಿನದ ಹುಡಿಗಳನ್ನು ಚೆನ್ನಾಗಿ ಕಲಸಿ ತಿಕ್ಕಿದ ಬೇರುಗಳನ್ನು ಅದರಲ್ಲಿ ಅದ್ದಿ ಅಂದವಾದ ಬಣ್ಣಬರುವಂತೆ ಮಾಡುವರು. ಇದೇ ಪೇಟೆಯಲ್ಲಿ ಸಿಕ್ಕುವ ಅರಸಿನವು.

**ಅಡುಗೆಯಲ್ಲಿ ಇದರ ಉಪಯೋಗ:**-ದಕ್ಷಿಣ ಭಾರತದಲ್ಲಿ ಶುಭ ದಿನಗಳಲ್ಲಿ ಸಿಹಿ ಪದಾರ್ಥಗಳ ಭಕ್ಷ್ಯವನ್ನು ಅರಸಿನದಎಲೆಯಲ್ಲಿಟ್ಟು ಬೇಯಿಸುತ್ತಾರೆ ಇದು ಆರೋಗ್ಯದಾಯಕವಾಗಿದ್ದು, ಸುವಾಸನೆ ಹಾಗು ರುಚಿ ಬರಲು ಸಹಾಯಕವಾಗುವದು. ಮನೆವಾರ್ತೆಗೆ ಬೆಣ್ಣೆಯನ್ನು ಕರಗಿಸಿ ತುಪ್ಪ ಮಾಡುವಾಗ್ಗೆ ಸುವಾಸನೆ ಬರಲು ಉಪಯೋಗಿಸುತ್ತಾರೆ. ಬೆಳ್ತಿಗೆ ಅಕ್ಕಿಯ ಅನ್ನವನ್ನು ಬೇಯಿಸುವಾಗ ಶುಭದಿನಗಳಲ್ಲಿ ಇದರ ಎಲೆಯನ್ನು ಹಾಕುವ ಪದ್ಧತಿ ಇದೆ. ಗಣ್ಣೆ, ಉಪ್ಪಿನಕಾಯಿ, ಸಿಹಿ ಭಕ್ಷ್ಯಾದಿಗಳಿಗೆ ಉಪಯೋಗಿಸುತ್ತಾರೆ. ಸಾರಿನ ಹುಡಿ, ಮಸಾಲೆ ಹುಡಿ, ಒಗ್ಗರಣೆಗ

ಳಲ್ಲಿಯೂ ಉಪಯೋಗಿಸುತ್ತಾರೆ. ಮಂಗಲಕಾರ್ಯದ ಭೋಜನಗಳಲ್ಲಿ ಅರಸಿನವನ್ನು ಹಾಕಿದ ಅನ್ನವನ್ನು 'ಚಿತ್ರಾನ್ನ'ವೆಂಬ ವಿಶೇಷ ಹೆಸರಿನಲ್ಲಿ ತಯಾರಿಸುವುದುಂಟು. ಯುರೋಪ್ ಮತ್ತು ಅಮೇರಿಕಾಗಳಲ್ಲಿಯೂ ನಮ್ಮಂತೆ ಮೇಲೋಗರಕ್ಕೆ, ಸುವಾಸನೆ, ವರ್ಣ, ರುಚಿಯನ್ನೀಯಲು ಉಪಯೋಗಿಸುತ್ತಾರೆ.

**ಧಾರ್ಮಿಕ ಕಾರ್ಯದಲ್ಲಿ ಉಪಯೋಗ:**–ಭಾರತೀಯರಿಗೆ ಇದು ಧಾರ್ಮಿಕ ಕೆಲಸದಲ್ಲಿ ಉಪಯೋಗಿಸುವ ವಸ್ತುಗಳಲ್ಲಿ ಒಂದಾಗಿದೆ. ಸ್ತ್ರೀಯರಿಗೆ ಇದು ಮಾಂಗಲ್ಯಕರವಿದೆ ಅವರಿಗೆ ಗೌರವ ಸಲ್ಲಿಸುವಾಗ್ಗೆ, ವೀಳ್ಯದೆಲೆ ಅಡಿಕೆ ಹೋಳುಗಳ ಜತೆಯಲ್ಲಿ ಅರಸಿನದ ತುಂಡು ಇಟ್ಟು ಕೊಡುವ ಸಂಪ್ರದಾಯವಿದೆ. ಇದರಿಂದ ತಯಾರಿಸಿದ ಕುಂಕುಮದ ತಿಲಕವು ಮಾಂಗಲ್ಯಕರವಲ್ಲದೆ, ಆರೋಗ್ಯ ದೃಷ್ಟಿಯಿಂದಲೂ ಹಿತಕರವು. ನೇತ್ರಪೀಡೆ, ಶಿರೋರೋಗ, ಋತುಸಂಬಂಧವಾದ ದೋಷಗಳು ಕೂಡಾ ಇದರಿಂದ ಸ್ವಲ್ಪಮಟ್ಟಿಗೆ ದೂರವಾಗುವುವು. ಅಲ್ಲದೆ ಆರೋಗ್ಯದಾಯಕವು, ವರ್ಣಕಾರಕ, ಸೌಂದರ್ಯಕರ ಸಾಧನವೂ ಆಗಿದೆ.

ಧಾರ್ಮಿಕ ಮಂಗಲಕಾರ್ಯವನ್ನಾರಂಭಿಸುವಾಗ್ಗೆ ಇದನ್ನು ಕಂಕಣ ಕಟ್ಟುವುದರಲ್ಲಿ ಉಪಯೋಗಿಸುವ ಸಂಪ್ರದಾಯವಿದೆ. ವಿದ್ಯಾಭ್ಯಾಸವನ್ನಾರಂಭಿಸುವಾಗ್ಗೆ ಪುರೋಹಿತರು ಬೆಳ್ತಿಗೆ ಅಕ್ಕಿಯನ್ನು ಹರಡಿ ಅರಸಿನ ತುಂಡಿನಿಂದ ಶ್ರೀ ಗಣೇಶಾಯ ನಮಃವೆಂದು ಬರೆಯಿಸುವ ವಾಡಿಕೆ ಭಾರತದಲ್ಲಿದೆ. ಮಂಗಲಕಾರ್ಯಗಳಲ್ಲಿ ಅರಸಿನದ ನೀರನ್ನು ಪ್ರೋಕ್ಷಿಸುವ ಅಥವಾ ಆರತಿಯಾಗಿ ತೋರಿಸುವದಿದೆ. ಪವಿತ್ರ ರಂಗೋಲೆಯನ್ನು ಹೋಮ ವಗೈರೆ ಧಾರ್ಮಿಕ ಕಾರ್ಯಗಳಲ್ಲಿ ಚಿತ್ರಿಸುವ ಚೌಕಟನ್ನು ಹಾಕಲು ಇದನ್ನು ಉಪಯೋಗಿಸುತ್ತಾರೆ. ಮದುವೆ, ರಥೋತ್ಸವಾದಿಗಳ ಅಂತ್ಯದಲ್ಲಿ ಅವಭೃತಸ್ನಾನ (ಓಕುಳಿ)ಯಲ್ಲಿ ಇದರ ನೀರನ್ನು ಉಪಯೋಗಿಸುತ್ತಾರೆ. ಹೋಳಿಹಬ್ಬದ ಸಮಯದಲ್ಲಿ ಅರಸಿನದ ನೀರಿನಿಂದ ಓಕುಳಿ ಆಟವಾಡುವರು. ಹಿಂದೂಸ್ಥಾನದಲ್ಲಿ ಅರಸಿನವನ್ನು ಸೌಭಾಗ್ಯ ವಸ್ತುವನ್ನಾಗಿ ಸ್ತ್ರೀಯರು ಧರಿಸುತ್ತಾರೆ. ತಮಿಳು ನಾಡಿನಲ್ಲಿ ಸ್ತ್ರೀಯರು ಪೇಟೆಯಲ್ಲಿ ಸಿಕ್ಕುವ ಅರಸಿನವನ್ನು ಧಾರ್ಮಿಕ ಕಾರ್ಯಗಳಲ್ಲಿ ಉಪಯೋಗಿಸುವದು ಅತೀ ವಿರಳ. ಬೇಯಿಸದೆ ಒಣಗಿಸಿ ಬರುವ

ಅರಸಿನವು ಅಲ್ಲಿ ಕರುಮಂಜಲ್ ಎಂದು ಮಾರಲು ಸಿಕ್ಕುವದನ್ನೇ ಹೆಚ್ಚಾಗಿ ಉಪಯೋಗಿಸುತ್ತಾರೆ.

**ಸ್ನಾನಕ್ಕಾಗಿ ಅರಸಿನದ ಉಪಯೋಗ:—** ದಕ್ಷಿಣ ಭಾರತದಲ್ಲಿ ಸ್ತ್ರೀಯರು ದಿನಾಲೂ ಇದನ್ನು ಮುಖಕೈಕಾಲುಗಳಿಗೆ ಹಚ್ಚಿ ಸ್ನಾನ ಮಾಡುವರು. ಇದರಿಂದ ನಾನಾ ರೀತಿಯ ಚರ್ಮವ್ಯಾಧಿಗಳು ಪರಿಹಾರವಾಗುವವು. ಅಲ್ಲದೆ ಬರತಕ್ಕಂತಹ ಚರ್ಮದೋಷಗಳು ಇತರ ಅಂಟು ವ್ಯಾಧಿಗಳ ಅಣೆಗಳು ನಿಸ್ಸಂದೇಹವಾಗಿ ದೂರವಾಗುತ್ತದೆ. ಇದು ಮುಖ ಮತ್ತು ಶರೀರಕ್ಕೆ ಕಾಂತಿಯನ್ನು ಕೊಡುವುದು. ಹಿಂದುಗಳಲ್ಲಿ ವಿಶೇಷವಾಗಿ ದೀಪಾವಳಿಯ ಸಮಯದಲ್ಲಿ ಎಣ್ಣೆ ಹಚ್ಚಿ ಸ್ನಾನಮಾಡುವಾಗ್ಗೆ, ಅರಸಿನದೊಂದಿಗೆ ಕಚ್ಚುರ, ಅಡವಿಕಚ್ಚುರ, ತೆಗಟಿಬೀಜ, ದವಣಿಪತ್ರ, ಪಚ್ಚಕರ್ಪುರ ಇತ್ಯಾದಿ ಸುಗಂಧದ್ರವ್ಯಗಳ ಮಿಶ್ರಣದ ಹುಡಿಯನ್ನು ಪನ್ನೀರಿನಲ್ಲಾಗಲಿ ನೀರಿನಲ್ಲಾಗಲಿ ಕಲಸಿ ಮೈಗೆ ತಿಕ್ಕುವ ಸಂಪ್ರದಾಯವಿದೆ. ಕೆಲವು ಆಗರ್ಭ ಶ್ರೀಮಂತರಲ್ಲಿ ಇದನ್ನು ದಿನಂಪ್ರತಿ ಉಪಯೋಗಿಸುವದು ಇದೆ. ಈ ಮಿಶ್ರಣಕ್ಕೆ ಕೊಂಕಣಿ ಭಾಷೆಯಲ್ಲಿ "ಒಟ್ನಿ" ಎಂದು ಕರೆಯುತ್ತಾರೆ. ಇದು ಕೊಂಕಣದಲ್ಲಿ ವಿಶೇಷ ಬಳಕೆಯಲ್ಲಿದೆ. ಅರಸಿನ ಹುಡಿ, ಕಡಲೆ ಹುಡಿ, ನೊರೆಕಾಯಿ ಹುಡಿ, ಸೀಗೆ ಹುಡಿಗಳ ಮಿಶ್ರಣವನ್ನು ಮಾಡಿ ಸ್ನಾನಮಾಡುವಾಗ್ಗೆ ಸಾಬೂನಿನ ಬದಲಾಗಿ ಈಗಲೂ ಉಪಯೋಗಿಸುವವರು ಇದ್ದಾರೆ. ಇದರಿಂದ ಉಷ್ಣವಲಯಗಳಲ್ಲಿ ಹೆಚ್ಚಾಗಿ ಕಂಡು ಬರುವ ಚರ್ಮದೋಷಾದಿಗಳು ಪರಿಹಾರವಾಗುವುದಲ್ಲದೆ, ಒಬ್ಬರಿಂದ ಇನ್ನೊಬ್ಬರಿಗೆ ಹರಡುವ ಅಂಟುರೋಗಗಳಿಂದ ವಿಮುಕ್ತರಾಗಿ ಆರೋಗ್ಯದಿಂದ ಬಾಳಬಹುದು. ಮಕ್ಕಳಿಗೆ ಹಾಗೂ ಮದುಮಗಳಿಗೆ ಮೈಯ ಚರ್ಮದ ಸೌಂದರ್ಯ ಹೆಚ್ಚಿಸಲು ಹಳ್ಳಿಗಳಲ್ಲಿ ಅರಸಿನವನ್ನು ತೆಂಗಿನ ಕಾಯಿಯ ಹಾಲಿನಲ್ಲಿ ಪರಿಮಳದ್ರವ್ಯಗಳೊಂದಿಗೆ ಅರೆದು ಮೈಗೆ ಹಚ್ಚಿ ಸ್ನಾನಮಾಡಿಸುವ ಪದ್ಧತಿ ಇದೆ. ಈ ರೀತಿ ಮಾಡುವುದರಿಂದ ಚರ್ಮವು ಒಣಗಿ ಏಳುವದು ಅಥವಾ ಒಡೆಯುವದು ಗುಣವಾಗುವುದಲ್ಲದೆ ಮೈ ವರ್ಣವು ಹೊಸದಾಗುವದು.

ಗುಣಗಳು:—ಆಯುರ್ವೇದದಲ್ಲಿ ಅರಸಿನವು ಖಾರ, ಕಹೀರಸಗಳಿದ್ದು ಉಷ್ಣರೂಕ್ಷ ಗುಣಗಳಿದ್ದು, ಸುವಾಸಿತವು, ಉತ್ತೇಜನೀಯವು, ರಸಾಯ

ನವು, ಸ್ತ್ರೀಯರಿಗೆ ಮಾಂಗಲ್ಯದಾಯಕವು, ವಾತನಾಶನವು, ಚರ್ಮರೋಗ, ಪ್ರಮೇಹ, ರಕ್ತದೋಷ, ಶೋಫ, ಪಾಂಡು, ಕಾಮಲಾ, ವ್ರಣ, ಕುಷ್ಠ, ನಂಜು, ಕಜ್ಜಿ, ತುರುಸುವಿಕೆ, ಪೀನಸ, ಅರುಚಿ, ಪಿತ್ತ ಮತ್ತು ಅಪಚೀ ಕಾದಿಗಳ ನಾಶಮಾಡುವ ಗುಣವುಳ್ಳದಾಗಿದೆ ಎಂದು ಉಲ್ಲೇಖಿಸಲಾಗಿದೆ. ಸಿದ್ಧ, ಯುನಾನಿಗಳಲ್ಲಿಯೂ ಇದರ ಗುಣಗಳ ಕುರಿತು ಬರೆಯಲಾಗಿದೆ. ಆಧುನಿಕ ರೀತಿಯಲ್ಲಿ ಇದರಲ್ಲಿ ಟರ್ಮರಿಕ್(Turmeric) ಎಂಬ ಉತ್ತಮ ಸಾರವುಳ್ಳ ಎಣ್ಣೆಯು, ಜಿಗಟು ಪದಾರ್ಥವು ಇದೆ. ಅಲ್ಲದೆ ಸ್ಟಾರ್ಚ್, ಕೆಲವಂಶ ಪ್ರೊಟೀನ್ ಮತ್ತು ಬಹಳ ಸೂಕ್ಷ್ಮ ಅಂಶದಷ್ಟು 'ಎ' ಜೀವಾತು ಇತ್ಯಾದಿ ಗಳಿವೆ ಎಂದು ಕಂಡುಹಿಡಿದಿರುವರು.

**ಔಷಧಿಯಲ್ಲಿ ಇದರ ಪ್ರಯೋಜನಗಳು:**—ಆಯುರ್ವೇದದಲ್ಲಿ ಅರಸಿನವನ್ನು ಹಸಿ, ಸ್ವರಸ, ಕಷಾಯ, ಚೂರ್ಣ, ಲೇಪ, ಮುಲಾಮು, ಎಣ್ಣೆ, ಘೃತ, ಲೇಪ, ರಸಾಯನ, ಧೂಪ, ಲೋಷನ್ ಇತ್ಯಾದಿಗಳಲ್ಲಿ ಉಪಯೋ ಗಿಸುತ್ತಾರೆ. ಗೃಹವೈದ್ಯದಲ್ಲಿಯೂ ಇದರ ಉಪಯೋಗವಿದೆ. ಆಧುನಿಕ ವೈದ್ಯದಲ್ಲಿ ಇದನ್ನು ಔಷಧಿಯ ತಯಾರಿಕೆಯಲ್ಲಿ ಬಳಸುತ್ತಾರೆ.

ಅರಸಿನದ ರಸವನ್ನು ಅಥವಾ ಹುಡಿಯನ್ನು ಆಗಲೇ ಉಂಟಾದ ಗಾಯ, ಬಡಿತದಿಂದಾದ ಜಜ್ಜುವಿಕೆ ಮತ್ತು ಚೇಳು ಇತ್ಯಾದಿ ವಿಷಜಂತು ಗಳ ಕಡಿತ ಇತ್ಯಾದಿಗಳಿಗೆ ಲೇಪಿಸಬಹುದು. ಹಸಿ ರಸವನ್ನು ಜೇನಿ ನೊಂದಿಗೆ ಸೇವಿಸಿದಲ್ಲಿ, ರಕ್ತಶುದ್ಧಿಯಾಗಿ ಚರ್ಮರೋಗವು ನಿವಾರಣೆ ಹೊಂದುವದಲ್ಲದೆ ರಕ್ತವು ವೃದ್ಧಿಯಾಗುವುದು. ಅರಸಿನವನ್ನು ನೆಲ್ಲಿ ಅಥವಾ ಲೋಳಿಸರದ ರಸದೊಂದಿಗೆ ಸೇವಿಸುತ್ತಾ ಬರಲು ಪಿತ್ತಕಾಮಲೆ (Jaundice) ಮತ್ತು ಪಾಂಡು (Anaemia) ಇತ್ಯಾದಿ ರೋಗಗಳು ಗುಣಹೊಂದುವವು. ಅರಸಿನವನ್ನೂ ವಿಡಂಗಬೀಜಗಳನ್ನೂ ಹುಡಿಮಾಡಿ ಜೇನು ಸೇರಿಸಿ ಸೇವಿಸಿದರೆ ಉದರದ ಕ್ರಿಮಿಗಳು ನಾಶವಾಗುವವು. ಅರಸಿನ ಚೂರ್ಣವನ್ನು 5ರಿಂದ 15 ಗ್ರೇನ್‌ಗಳ ತನಕ ಬಿಸಿನೀರಿನಲ್ಲಿ ಅಥವಾ ಹಾಲಿ ನಲ್ಲಿ ಬೆರೆಸಿ ಜೇನು ಮತ್ತು ಕಲ್ಲುಸಕ್ಕರೆಗಳೊಡನೆ ಸರ್ವಸಾಧಾರಣವಾಗಿ ಸೇವಿಸುವದು ಕ್ರಮವು. ಅರಸಿನ ಚೂರ್ಣವನ್ನು ಪ್ರಮೇಹಗಳಲ್ಲಿ ನೆಲ್ಲಿ ಮತ್ತು ಜೇನಿನಲ್ಲಿ ಸೇವಿಸಬೇಕು. ಕುಷ್ಠಗಳಲ್ಲಿ ಗೋಮೂತ್ರದೊಡನೆಯೂ ಬಿಟ್ಟು ಬಿಟ್ಟು ಬರುವ ಜ್ವರಗಳಲ್ಲಿ ಅಮೃತಬಳ್ಳಿಯ ಸತ್ವದೊಡನೆಯೂ

ಸೇವಿಸಬೇಕು. ಇದನ್ನು ಅಗ್ನಿಮಾಂದ್ಯ, ವಾಯು, ಉದರವಿಕಾರಗಳಲ್ಲಿ ಕ್ರಮವಾಗಿ ಹಿಪ್ಲಿ, ಜೀರಿಗೆ, ಅಣಿಲೆಯೊಂದಿಗೆ ಸೇವಿಸಿದಲ್ಲಿ ಉತ್ತಮ ಗುಣ ಸಿಕ್ಕುತ್ತದೆ. ರಕ್ತದೋಷದಿಂದ ಉಂಟಾದ ಚರ್ಮವ್ಯಾಧಿಗಳು ಇದರ ಬಹಿರ್ಮುಖ ಲೇಪನದಿಂದಲೂ ಸೇವನಾಕ್ರಮದಿಂದಲೂ ಗುಣವಾಗುವವು. ಮಸೂರಿಕಾ, ಉಷ್ಣದಿಂದ ಬರುವ ಸ್ಫೋಟನ, ಮೊಡವೆ ಮತ್ತು ಚರ್ಮವ್ಯಾಧಿಗಳಿಂದಾದ ವ್ರಣಾದಿಗಳಿಗೆ ಸಂದರ್ಭಾನುಸಾರ ಬೇವಿನ ಎಲೆಯ ರಸ, ಎಣ್ಣೆ, ತುಪ್ಪ, ಜೇನು, ಬೆಣ್ಣೆ ಅಥವಾ ವೆಸಲೀನ್ ಇತ್ಯಾದಿಗಳಲ್ಲಿ ಅರೆದು ಮುಲಾಮು ಮಾಡಿ ಹಚ್ಚಿದರೆ ಗುಣ ಉಂಟಾಗುವದಲ್ಲದೆ ಅದರ ಕಲೆಗಳು ಸಹ ಮಾಯುವವು. ಫರಂಗೀರೋಗಕ್ಕೆ ಅಡುಸೋಗೆ ಎಲೆಯ ರಸ ಮತ್ತು ಗೋಮೂತ್ರದಲ್ಲಿ ಅರಸಿನವನ್ನು ಚೆನ್ನಾಗಿ ಅರೆದು ಲೇಪವನ್ನು ಚರ್ಮಕ್ಕೆ ತಿಕ್ಕಬೇಕು ಅಥವಾ ಅರಸಿನ ಹುಡಿಯನ್ನು ಬೇವಿನ ಎಲೆಯ ರಸ ಅಥವಾ ಬಾಳೆಗಿಡದ ಬೂದಿಯ ಮಿಶ್ರಣಮಾಡಿ ಚರ್ಮರೋಗಕ್ಕೆ ಹಚ್ಚುವದು. ಅರಸಿನವನ್ನು ಯುಕ್ತವಾದ ಅನುಪಾನದೊಂದಿಗೆ ದೀರ್ಘ ಕಾಲ ಉಪಯೋಗಿಸಿದರೆ ಕಜ್ಜಿ, ಗಜಕರ್ಣ ಇತ್ಯಾದಿ ಚರ್ಮರೋಗಗಳು ಗುಣಹೊಂದುವವು. ತುಪ್ಪದಲ್ಲಿ ಅರಸಿನ ಚೂರ್ಣವನ್ನು ಕಲಸಿ ನೆಕ್ಕಿದಲ್ಲಿ ಉಷ್ಣದಿಂದ ಉಂಟಾದ ಕೆಮ್ಮು; ಜೇನು ಮತ್ತು ತುಳಸಿರಸದಲ್ಲಿ ಮಿಶ್ರ ಮಾಡಿ ಸೇವಿಸಿದಲ್ಲಿ ಶೀತದಿಂದಾದ ಕೆಮ್ಮು, ಜೇನು, ಹಸಿಶುಂಠಿ ರಸ ದೊಂದಿಗೆ ಸೇವಿಸಿದಲ್ಲಿ ವಾತದಿಂದ ಬರುವ ಒಣಕೆಮ್ಮು; ಗುಣವಾಗುವವು. ಶುಂಠಿ, ಕಾಳುಮೆಣಸು, ಹಿಪ್ಲಿ (ತ್ರಿಕಟು) ಮತ್ತು ಅರಸಿನಗಳನ್ನು ಸಮ ಭಾಗ ಸೇರಿಸಿ ಚೂರ್ಣಮಾಡಿಯಾಗಲಿ ಅಥವಾ ಗುಳಿಗೆ ಮಾಡಿ ಎಳ್ಳೆಣ್ಣೆ ಯಲ್ಲಿ ಅರೆದು ತಲೆಗೆ ಹಚ್ಚುವುದರಿಂದ ಶೀತಸಂಬಂಧವಾದ ಶಿರೋರೋಗವು ಗುಣವಾಗುವದು. ಅಣಿಲೆ, ಶುಂಠಿ, ನೆಲ್ಲಿ (ತ್ರಿಫಲಾ) ಮತ್ತು ಅರಸಿನ ವನ್ನು ಮಿಶ್ರಮಾಡಿ ಮೇಲಿನಂತೆ ಉಪಯೋಗಿಸುವದರಿಂದ ಪಿತ್ತಸಂಬಂಧ ವಾದ ಶಿರೋದೋಷವು ಗುಣವಾಗುವುದು. ಅಂಬಿಲದ ತಿಳಿನೀರಿನಲ್ಲಿ ಅರಸಿನವನ್ನೆರದು ಪಾನಮಾಡಿದಲ್ಲಿ, ಶೀತಜ್ವರ ಗುಣವಾಗುವುದಲ್ಲದೆ ದೇಶಾಂತರದಲ್ಲಿದ್ದವನಿಗಾದನೂ ಶೀತದೋಷವು ತಟ್ಟದು. ನೀಲಿಸೊಪ್ಪು, ಹಸಿ ಅರಸಿನ ಗೆಡ್ಡೆ ಮಜ್ಜಿಗೆಯಲ್ಲಿ ಅರೆದು ಸೇವಿಸಿದರೆ ಅಗ್ನಿಸರ್ಪಕ್ಕೆ ಉತ್ತಮವು.

ಅರಸಿನವನ್ನು ಸುಣ್ಣದೊಂದಿಗೆ ನೀರಿನಲ್ಲಿ ಕಲಸಿ, ಗೋದಿಹಿಟ್ಟು ಅಥವಾ ಅನ್ನ ಇತ್ಯಾದಿ ಪಿಷ್ಟ ಪದಾರ್ಥಗಳಲ್ಲಿ ಕಲಸಿ ಬಿಸಿಮಾಡಿದ ಪಿಷ್ಟಕ (Poultice)ವನ್ನು ಬಿಸಿಯಾಗಿ ಕುರುಗಳಿಗೆ ಉಪಯೋಗಿಸುತ್ತಾರೆ. ಅರಸಿನ ಹುಡಿಯನ್ನು ಸ್ವಲ್ಪ ಸುಣ್ಣ ಮತ್ತು ಪೆಟ್ಲುಪ್ಪುಗಳೊಂದಿಗೆ ಬೆರಸಿ ಬಿಸಿಮಾಡಿ ಹಚ್ಚಿದರೆ ಉಳುಕಿದ, ಜಜ್ಜಿದ ನೋವುಗಳಿಗೂ, ಬಾತುವಿಕಗೂ, ಎಲುಬು ಸಂಧುಗಳ ಬಾತುವಿಕೆಯುಲ್ಲಿಯೂ ಇವುಗಳ ವೇದನೆಗಳಿಗೂ ಉತ್ತಮವಾದ ಔಷಧಿಯು. ಸಾಂಕ್ರಾಮಿಕ ರೋಗಗಳಾದ ಸಿಡುಬು, ಕೋಟ್ಲೆ, ಕೋರ ಇತ್ಯಾದಿಗಳಿಗೆ ಬೇವಿನ ಎಲೆಯ ರಸದೊಂದಿಗೆ ಮಿಶ್ರಮಾಡಿ ತಾಗಿಸಿದಲ್ಲಿ ತುರಿಸುವಿಕೆಯು ಕಡಿಮೆಯಾಗುವುದು. ಅಲ್ಲದೆ ಗುಣಹೊಂದಿದ ಮೇಲೆ ಅವುಗಳಿಂದ ಉಂಟಾದ ವ್ರಣದ ಕಲೆಗಳನ್ನು ಮಾಯಿಸುವರೆ ಇದನ್ನು ತುಳಸಿ ಎಲೆಯ ರಸದಲ್ಲಿ ಲೇಪಿಸಿದಲ್ಲಿ ಅಥವಾ ಬರೇ ಹುಡಿಯನ್ನು ಚಿಮುಕಿಸಿದಲ್ಲಿ ಕಲೆಗಳು ಹೋಗಿ ಚರ್ಮಕ್ಕೆ ಕಾಂತಿಯು ಸಹ ಉಂಟಾಗಲು ಸಹಾಯಕವಾಗುವದು. ಮೇಲಿನ ರೋಗಗಳು ಹಬ್ಬಿರುವಾಗ್ಯೆ ಅವುಗಳನ್ನು ತಡೆಯುವ ಶಕ್ತಿ ಅರಸಿನದಲ್ಲಿರುವುದರಿಂದ ಅರಸಿನವನ್ನು ಲೇಪನ ಮತ್ತು ಸೇವನಾವಿಧಿಯಿಂದ ಉಪಯೋಗಿಸುವುದು ಉತ್ತಮ.

ಅರಸಿನ ಮತ್ತು ಕಹಿಬೇವು ಎಲೆಗಳ ಕಷಾಯವನ್ನು ವ್ರಣ ತೊಳೆಯಲು ಲೋಷನ್‌ನಂತೆ ಉಪಯೋಗಿಸುವರು. ಇದು ಅಂಟು ಜಾಡ್ಯ ನಿವಾರಣಾಶಕ್ತಿ ಉಳ್ಳದಾಗಿದೆ. ಅಲ್ಲದೆ ವಾಸನೆಯನ್ನು ತೆಗೆಯುವ ಶಕ್ತಿ ಉಳ್ಳದಾಗಿದೆ. ಇದರ ಕಷಾಯವನ್ನು, ಜಲದೋಷದಿಂದಲೂ ಉಷ್ಣದಿಂದಲೂ ಉಂಟಾಗುವ ಕಣ್ಣಿನ ರೆಪ್ಪೆಯಲ್ಲಾಗುವ ಸಣ್ಣ ಕುರುಗಳ ನೋವುಗಳಿಗೆ ಮತ್ತು ಕೀವು ಬರುವಿಕೆಯಲ್ಲಿಯೂ ತೊಳೆಯಲು ಉಪಯೋಗಿಸುತ್ತಾರೆ. ಅಲ್ಲದೆ ಸ್ವಚ್ಛವಾದ ವಸ್ತ್ರವನ್ನು ಇದರ ಕಷಾಯದಲ್ಲಿ ಅದ್ದಿ ಕಣ್ಣಿಗೆ ಇಡುತ್ತಾರೆ. ಅರಸಿನ ಹುಡಿಯನ್ನು ಪನ್ನೀರಿನಲ್ಲಿ ಮಿಶ್ರಮಾಡಿ ಹಚ್ಚುವದುಂಟು. ಮೂಲವ್ಯಾಧಿಯ ಮೂಳೆಗಳಿಗೆ ಅರಸಿನ, ಕಳ್ಳಿಯ ಹಾಲು, ನೀರುಳ್ಳಿಗಳನ್ನು ಸಾಸಿವೆ ಎಣ್ಣೆಯಲ್ಲಿ ಅಥವಾ ಅಕ್ಷಿಬೀಜದ ಎಣ್ಣೆಯಲ್ಲಿ ಅರೆದು ಮಾಡಿದ ಮುಲಾಮು ಆದರ ನೋವು ಉಂಟಾಗುವಾಗ್ಯೆ ಹಚ್ಚಲು ಮತ್ತು ಮೂಳೆಗಳನ್ನು ಕರಗಿಸಲು ದಿವ್ಯವಾದ ಔಷಧಿಯು. ಅರಸಿನ ಮತ್ತು ಲೋಳಸರದ ಬೇರು ಅಥವಾ ಹಾಳೆಗಳ ರಸ

ವನ್ನು ಅರೆದು ಸ್ವಲ್ಪ ಬಿಸಿಮಾಡಿ ಸ್ತನಗಳ ಮೇಲೆ ಲೇಪಿಸಿದರೆ ಸ್ತನ್ಯದೋಷ ಗಳು ಗುಣವಾಗುವವು. ಮಹಾಶ್ರಾವಣಿ (ಮಹಾಮುಂಡಿ), ಅರಸಿನ ಇರುವೇರಿ ದಂಟು ಇವುಗಳ ಕಷಾಯದಿಂದ ಸ್ನಾನಮಾಡಿಸಿ, ಸಪ್ತಪಾಲದ ಕೆತ್ತೆ, ಅಣಿಲೆಸಿಪ್ಪೆ, ಅರಸಿನ, ಮರದರಸಿನದ ಸಿಪ್ಪೆ ಮತ್ತು ಶ್ರೀಗಂಧ ಇವುಗಳ ಲೇಪವನ್ನು ಹಚ್ಚುವದರಿಂದ ಮಕ್ಕಳ ಸಕಲ ಗ್ರಹಬಾಧೆಗಳು ಮಾಯವಾಗುವವು. ಅರಸಿನ ಒಂದು ಪಾಲು ಸ್ವಚ್ಛವಾದ ಪಟಿಖಾರ 20 ಪಾಲು ಸೇರಿಸಿ ಪನ್ನೀರಿನಲ್ಲಿ ಅರೆದು ಕಣ್ಣುಗಳ ವಿದ್ರಧಿಗಳಿಗೆ ಲೇಪ ಹಚ್ಚಲು ಉತ್ತಮವು. ಮೂತ್ರ ದೋಷಾದಿಗಳಿಗೆ ಅರಸಿನ ಮತ್ತು ನೆಗ್ಗಿಲಮುಳ್ಳಿನ ಕಷಾಯ ಮಾಡಿ ಸೇವಿಸಿದರೆ ತುಂಬಾ ಗುಣವನ್ನೀಯು ವುದು. ಮೂತ್ರ ಸರಿಯಾಗಿ ಆಗದಿದ್ದಲ್ಲಿ ಮೇಲಿನ ಕಷಾಯದಲ್ಲಿ ಪುನ-ರ್ನವಿಯ ಬೇರು ಅರೆದು ಸೇವಿಸುವುದು. ಅರಸಿನ, ಜೇಷ್ಠಮಧುವನ್ನು ಹಾಲಿನಲ್ಲಿ ಬೇಯಿಸಿ ಕಲ್ಲುಸಕ್ಕರೆ ಹಾಕಿ ಸೇವಿಸಿದರೆ ತೀವ್ರ ಕೆಮ್ಮು, ನೆಗಡಿ ಗಳು ಗುಣಹೊಂದುವವು. ಅರಸಿನ, ತ್ರಿಫಲಾ (ಅಣಿಲೆ, ಶಾಂತಿ, ನೆಲ್ಲಿಗಳ ಸಿಪ್ಪೆ) ಚೂರ್ಣ ಮತ್ತು ರಸಾಂಜನವನ್ನು ನೀರಿನಲ್ಲಿ ಅರೆದು ಮಾತ್ರೆಮಾಡಿ ಅದನ್ನು ಪಿತ್ತಕಾಮಿಲೆ, ರಕ್ತದೋಷ, ಕಣ್ಣಿನ ದೋಷ, ಚರ್ಮವ್ಯಾಧಿಗಳಲ್ಲಿ ಲೇಪನ ಮತ್ತು ಸೇವನಾವಿಧಿಯಿಂದ ಸೇವಿಸಬಹುದು. ಅರಸಿನ ಮರ ದರಸಿನ, ಅಶ್ವಗಂಧಿ, ಇಂದುಪ್ಪುಗಳನ್ನು ಸಮಾಂಶ ಮಜ್ಜಿಗೆಯಲ್ಲಿ ಅರೆದು ಬಿಸಿಮಾಡಿ ಸೇವಿಸಿದರೆ ವಾತ ಕ್ಷಯದಲ್ಲಿ ಪ್ರಯೋಜನ ಸಿಗುವುದು.

ಮನೆಯೊಳಗಿನ ಹಲ್ಲಿಯ ವಿಷದಲ್ಲಿ ಅರಸಿನ, ಕಲ್ಲುಸಕ್ಕರೆಗಳ ಮಿಶ್ರಣವನ್ನು ಹಾಲಿನಲ್ಲಿ ಸೇವಿಸಬೇಕು. ಕಾಕಮಾಚಿಯ ವಿಷದಲ್ಲಿ ಅರಸಿನ ಕಷಾಯವನ್ನು ತುಪ್ಪ ಸೇರಿಸಿ ಸೇವಿಸುವದು. ಅಡಿಕೆ ತಿಂದ ವಿಕಾರದಲ್ಲಿ ಅರಸಿನವನ್ನು ಇಂದುಪ್ಪು ಮಿಶ್ರಣಮಾಡಿ ಸೇವಿಸುವದು. ಮನೆ ಯೊಳಗಿನ ಸಣ್ಣ ವಿಷಜಂತುಗಳ ಗಾಯದಲ್ಲಿ ಅರಸಿನ ಮತ್ತು ಹಿಂಗುಗ ಳನ್ನು ತುಳಸಿ ಎಲೆ ರಸ ಅಥವಾ ನೀರಿನಲ್ಲಿ ಅರೆದು ಹಚ್ಚುವದು.

ಅರಸಿನ ಧೂಪ ಅಥವಾ ಬಿಸಿ ಕುದಿಯುವ ನೀರಿನಲ್ಲಿ ಅರಸಿನ ಹುಡಿ ಯನ್ನು ಹಾಕಿ ಅದರಿಂದ ಬರುವ ಆವಿಯನ್ನು ಅಥವಾ ಅರಸಿನ ಹುಡಿ ಯನ್ನು ಬಾಳೆ ಎಲೆಯಲ್ಲಿ ಸುತ್ತಿ ಮಾಡಿದ ಬತ್ತಿ (ಬೀಡಿಯಂತೆ) ಯಿಂದ ಬರುವ ಹೊಗೆಯನ್ನು ಸೇವಿಸುವದರಿಂದ ಜಲದೋಷದಿಂದ ಬರುವ ಶೀತ,

ನೆಗಡಿ, ತಲೆವೇದನೆ, ತಲೆಭಾರ, ಕೆಮ್ಮು ಮತ್ತು ಕಫ ಸಂಬಂಧವಾದ ಉನ್ಮಾದಗಳು, ಸ್ತ್ರೀಯರ ಗರ್ಭದೋಷ ಸಂಬಂಧವಾದ ವಾಯು (ಹಿಸ್ಟೆರಿಯಾ) ಉನ್ಮಾದ ಚೇಷ್ಟೆಗಳಿಗೂ, ಮಕ್ಕಳ ಬಾಲಗ್ರಹ ಸಂಬಂಧವಾದ ಚೇಷ್ಟೆಗಳಿಗೂ ಉತ್ತಮ. ಸೇವಿಸಿದ ನಂತರ ಸಾಧಾರಣ ಒಂದೂವರೆ ಗಂಟೆ ಕಾಲ ದ್ರವವಿರುವ ಯಾವದನ್ನೂ ಸೇವಿಸಬಾರದು. ಇದರ ಹೊಗೆಯನ್ನು ಚೇಳು, ಸಣ್ಣ ವಿಷಜಂತುಗಳು ಕಚ್ಚಿದ ಸ್ಥಳಗಳಲ್ಲಿ ಉಪಾಯದಿಂದ ನಳಿಗೆ ಮುಖಾಂತರವಾಗಲಿ ಯಾ ಇತರ ವಿಧಾನದಿಂದಾಗಲಿ ಬಿಡಲು, ಆದರ ವಿಷವು ನಾಶವಾಗುವದು.

ದೇಶೀಯ ಔಷಧಿ ತಯಾರಿಕೆಯಲ್ಲಿ ರಸ ಔಷಧಿಗಳ ಮಾರಣ, ಶೋಧನಾದಿಗಳಲ್ಲಿ ಅರಸಿನದ ಧಾರಾಳ ಉಪಯೋಗವಿದೆ. ಅರಸಿನವು ಬೀಳುವ ಕೆಲವು ಪ್ರಾಚೀನ ಶಾಸ್ತ್ರೀಯವಾದ ವೈದ್ಯಗ್ರಂಥಗಳಲ್ಲಿ ಹೇಳಿದ ಯೋಗಾದಿಗಳ ಔಷಧಿಗಳು:-ಅಶ್ವಗಂಧಾರಿಷ್ಟ ಬ್ರಾಹ್ಮಿಘೃತ, ಚಂದನಾಸವ, ರಾಸ್ನಾದಿ ಲೇಪ ಚೂರ್ಣ, ಚಂದ್ರಪ್ರಭಾವಟಿ, ದಶಮೂಲಾರಿಷ್ಟ, ಲಾಕ್ಷಾದಿ ತೈಲ, ಕಲ್ಯಾಣ ಘೃತ, ಕಾಸೀಸಾದಿ ಘೃತ, ಮಂಜಿಷ್ಠಾದಿ ತೈಲ ಮತ್ತು ಕಷಾಯ, ನಿಶಾದಿ ಚೂರ್ಣ ನೀಲಿನಿಯಾದಿ ಚೂರ್ಣ, ಪ್ರಪುನ್ನಾಟಾದಿ ಲೇಪ, ಪಂಚತಿಕ್ತ ಗುಗ್ಗುಲುಘೃತ, ಪಿಪ್ಪಲ್ಯಾಸವ, ದಶಮೂಲಾರಿಷ್ಟ, ರಸೋತ್ತಮಾದಿ ಲೇಪ, ಸುದರ್ಶನಚೂರ್ಣ, ದಶಾಂಗಲೇಪ ಚೂರ್ಣ, ಶಿವಮೋದಕ ಮತ್ತು ಹರಿದ್ರಾಖಂಡಾವಲೇಹ ಇತ್ಯಾದಿಗಳು.

ಕೈಗಾರಿಕೆಗಳಲ್ಲಿ ರೇಶ್ಮೆ, ಉಣ್ಣೆ, ಹತ್ತಿ, ಚರ್ಮ, ವಸ್ತ್ರಾದಿಗಳಿಗೆ ಬಣ್ಣ ಹಾಕಲು ಉಪಯೋಗಿಸುತ್ತಾರೆ. ಬೆಣ್ಣೆ, ಉಪ್ಪಿನಕಾಯಿ, ಮುರಬ್ಬ, ಮಿಠಾಯಿ ಇತ್ಯಾದಿಗಳಿಗೆ ವರ್ಣವನ್ನೀಯಲು ಉಪಯೋಗಿಸುತ್ತಾರೆ. ಅರಸಿನದಿಂದ ಕುಂಕುಮವನ್ನು ಮಾಡುವ ಕ್ರಮ:—1 ತೊಲೆ ಬಳಿಗಾರ, 1 ತೊಲೆ ಫಟಿಕಾರ, 5 ತೊಲೆ ಅರಸಿನ. ಅರಸಿನವನ್ನು ಚೂರ್ಣಮಾಡಿ ಈ ಮೇಲೆ ಹೇಳಿದ ಎರಡರ ಚೂರ್ಣಗಳನ್ನು ಬೇರೆ ಬೇರೆ ಚೂರ್ಣಮಾಡಿ ಈ ಚೂರ್ಣಗಳನ್ನು ಮಿಶ್ರಮಾಡಿದ ನಂತರ ಮುಳುಗುವಂತೆ ನಿಂಬೆಹಣ್ಣಿನ ರಸವನ್ನಾಗಲಿ, ದೊಡ್ಲಿಕಾಯಿ ರಸವನ್ನಾಗಲಿ ಹಾಕಿ ಕಲಸಿ ಕಿಲುಬು ಬಾರದ ಪಾತ್ರೆಯಲ್ಲಿಟ್ಟು ಮುಚ್ಚಳ ಮುಚ್ಚಿ ಮೂರು ದಿನ ಮುಚ್ಚಳ ತೆಗೆ-

ಯಾದೆ ಚೆನ್ನಾಗಿ ಅಲ್ಲಾಡಿಸಿ ನಾಲ್ಕನೇ ದಿನ ಬಿಸಿಲಲ್ಲಿಟ್ಟು ಚೆನ್ನಾಗಿ ಒಣಗಿದ ನಂತರ ಪುಡಿಮಾಡುವದು. ಇದೇ ಕುಂಕುಮವು.

**ಉತ್ತಮ ಅರಸಿನದ ಪರೀಕ್ಷೆ:—** ಉತ್ತಮವಾದ ಅರಸಿನವು ಕೆಂಪು ಕೂಡಿದ ಕಿತ್ತಳೆ ವರ್ಣ ಉಳ್ಳದಾಗಿ ತುಂಡುಮಾಡಿದಲ್ಲಿ ಅದರೊಳಗೆ ಸ್ನಿಗ್ಧತೆಯು ಇದ್ದು ಭಾರ ಉಳ್ಳದಾಗಿರಬೇಕು. ಅದನ್ನು ಸುಟ್ಟಲ್ಲಿ ಅದರ ಹೊಗೆಯು ಅದರಲ್ಲಿದ್ದ ಎಣ್ಣೆಯಿಂದಾಗಿ ಪರಿಮಳಯುಕ್ತವಾಗಿಯೂ ಇರಬೇಕಲ್ಲದೆ ಉರಿಯುತ್ತಿದ್ದ ಅದರ ಕೆಂಡವು ಬೇಗನೆ ಬೂದಿಯಾಗಲಾರದು. ಅಲ್ಲದೆ ಹಗುರವಿದ್ದು, ಸ್ನಿಗ್ಧತೆ ಇಲ್ಲದ, ಒಣಗಿ ಶುಷ್ಕವಾದ, ಹಳತಾಗಿ ತೂತು ಬಿದ್ದ ಅರಸಿನವು ಉತ್ತಮವಾದ ಗುಣವೀಯಲಾರದು.

ಅರಸಿನವನ್ನು ಇತಿಹಾಸದೃಷ್ಟಿಯಲ್ಲಿ ನೋಡಿದರೆ ಅದರ ಮೂಲ ಸ್ಥಾನವು ಭಾರತವೆಂಬುದರಲ್ಲಿ ಸಂಶಯ ಬರಲಾರದು. ಶ್ರೀ ವೇದವ್ಯಾಸ, ಕಾಳಿದಾಸ ಮೊದಲಾದವರ ಕೃತಿಗಳಲ್ಲಿ ಅರಸಿನದ ಉಲ್ಲೇಖವಿದೆ. ವೇದಗಳಲ್ಲಿಯೂ ಇದರ ವಿಷಯವು ಬರುತ್ತದೆ. ಪುರಾತನ ವೈದ್ಯ ಗ್ರಂಥಕಾರರಾದ ಸುಶ್ರುತ, ಚರಕಾದಿಗಳು ಇದರ ಗುಣವನ್ನು ಕಂಡು ತುಂಬಾ ಬರೆದಿರುತ್ತಾರೆ.



## "ಬಂದಾಣೆ ಮಾಲೆ"ಯಲ್ಲಿ

## ಈ ವರೆಗೆ ಪ್ರಕಟವಾಗಿರುವ ಏಕಾಂಕ ನಾಟಕಗಳು

1 ನಾರೀಶ್ವರರು
2 ಸದ್ರಿ ಸುಬ್ಬ
3 ಚುನಾವಣೆ ಅಥವ ಬನಾವಣೆ
4 ವೆಂಕಟನ ಸಂಕಟ
5 ಬಾಬಿಗೆ ಬಾಸಿಂಗ
6 ಸತ್ಯವಂತ ಬಾಬಿ
7 ಪುರ್ಜಿ
8 ಸತೀ ಸಾವಿತ್ರಿ
9 ಅಕಾಂಡ ತಾಂಡವ
10 ಮೀರಾ ಬಾಯಿ
11 ಚುಟ್ಟ ಬಿಟ್ಟ ದಿಟ್ಟ
12 ಶಿಶುಪಾಲ ಮಾನಭಂಗ
13 ಜರಾಸಂಧ ವಧೆ
14 ಸತ್ಯ ಹರಿಶ್ಚಂದ್ರ
15 ಮಾಯಾಮೃಗ
16 ಸತೀ ವೃಂದಾ
17 ಗೌತಮನ ಗೃಹತ್ಯಾಗ ಮತ್ತು ಸಿದ್ಧಾರ್ಥನ ಕಾರುಣ್ಯ
18 ಪುನರುಜ್ಜೀವನ
19 ಸ್ವಾತಂತ್ರ್ಯ
20 ಭಕ್ತ ಕುಚೇಲ
21 ಮದ್ವೆ ಅವಾಂತರ
22 ಗ್ರಾಮ ಸ್ವಾತಂತ್ರ್ಯ
23 ಭಕ್ತ ಧ್ರುವ
24 ಜೇಡನ ಮಗಳು
25 ಪುರಂದರದಾಸರು
26 ವೀರಾಗ್ರಣಿ ಕರ್ಣ
27 ಕುಶ-ಲವ
28 ಅಕ್ಷಯ ಪಾತ್ರೆ
29 ವೈರಾಗ್ಯ ನಿಧಿ
30 ಭರತನ ಬಂಧುಪ್ರೇಮ
31 ಮಹಾತ್ಮಾ ಉದಂಕ
32 ಭಕ್ತ ಪ್ರಹ್ಲಾದ
33 ಅಭಿಮನ್ಯು
34 ವಿಷ ಬೀಜ
35 ಬಲಿ ಬಂಧನ
36 ವೀರಜನನಿ (ಗೀತಾ ನಾಟಕ)
37 ಶಕುಂತಲಾ
38 ರುಕ್ಮಾಂಗದ
39 ಸತ್ಯಭಾಮಾ ಗರ್ವಭಂಗ
40 ಶರಸೇತು
41 ದೀಪಾವಳಿ
42 ಶಂಭುಕ ವಧೆ
43 ರಾಜಾ ಭರ್ತೃಹರಿ
44 ಶರಶಯ್ಯೆ
45 ಕನಕದಾಸರು
46 ರಾಮರಾಜ್ಯದ ಮಡಿವಾಳ
47 ಭಸ್ಮಾಸುರ ಮೋಹಿನಿ
48 ಗೋಪಾಲನ ಸ್ವಾಮ್ಯ
49 ನರವೀರ ನೃಪತುಂಗ
50 ಮಾಯಾವಿನಿ
51 ಧರ್ಮಸಂಕಟ ಅಥವ ಕರ್ಣ
52 ಅಹಲ್ಯೋದ್ಧಾರ
53 ಸಲೀಮಾ